# ನಾಡ ಹಬ್ಬ
# ಮೈಸೂರು ದಸರಾ ಉತ್ಸವ
# 2016

**01-10-2016**

## ಉದ್ಘಾಟನ ಭಾಷಣ

**ನಾಡೋಜ ಡಾ. ಚೆನ್ನವೀರ ಕಣವಿ**

1.

- ಉದ್ಘಾಟನ ಸಮಾರಂಭದ ಅಧ್ಯಕ್ಷರೂ, ಮಾನ್ಯ ಶಾಸಕರೂ ಆದ ಶ್ರೀ ಜಿ.ಟಿ. ದೇವೇಗೌಡ ಅವರೆ,
- ಕರ್ನಾಟಕ ರಾಜ್ಯದ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಸಿದ್ದರಾಮಯ್ಯನವರೆ,
- ಸನ್ಮಾನ್ಯ ಲೋಕೋಪಯೋಗಿ ಸಚಿವರು, ಮೈಸೂರು ಜಿಲ್ಲಾ ಉಸ್ತುವಾರಿ ಸಚಿವರೂ ಆದ ಡಾ. ಹೆಚ್.ಸಿ.ಮಹದೇವಪ್ಪನವರೆ,
- ಸಮಾರಂಭದ ಮುಖ್ಯ ಅತಿಥಿಗಳೂ, ಮಾನ್ಯ ಸಚಿವರೂ ಆದ ಶ್ರೀ ಹೆಚ್.ಎಸ್. ಮಹಾದೇವಪ್ರಸಾದ್ ಅವರೆ, ಶ್ರೀ ತನ್ವೀರ್ ಸೇಠ್ ಅವರೆ, ಶ್ರೀಮತಿ ಉಮಾಶ್ರೀ ಅವರೆ, ಶ್ರೀ ರುದ್ರಪ್ಪ ಲಮಾಣಿ ಅವರೆ,
- ಮಾನ್ಯ ಉಪಸಭಾಪತಿಗಳಾದ ಶ್ರೀ ಮರಿತಿಬ್ಬೇಗೌಡ ಅವರೆ,
- ಜಿಲ್ಲಾಧಿಕಾರಿಗಳು, ದಸರಾ ವಿಶೇಷಾಧಿಕಾರಿಗಳು ಆದ ಡಿ.ರಂದೀಪ ಅವರೆ,
- ಪೂಜ್ಯ ಮಹಾಪೌರರಾದ ಶ್ರೀ ಬಿ.ಎಲ್.ಭೈರಪ್ಪ ನವರೆ,
- ಸಭೆಯಲ್ಲಿ ಉಪಸ್ಥಿತರಿರುವ ಮಾನ್ಯರಾದ ಎಲ್ಲಾ ಸಚಿವರೆ, ಶಾಸಕರೆ, ಸಂಸದರೆ,
- ಗೌರವಾನ್ವಿತ ಆಮಂತ್ರಿತರೆ, ಮಾನ್ಯ ಸಭಿಕರೆ, ಎಲ್ಲರಿಗೂ ನಮಸ್ಕಾರ
- ತಮ್ಮೆಲ್ಲರಿಗೂ ನಾಡ ಹಬ್ಬದ ಹಾರ್ದಿಕ ಶುಭಾಶಯಗಳು

2.

- ಈ ವರ್ಷದ ಮೈಸೂರು ದಸರಾ ಮಹೋತ್ಸವದ ಉದ್ಘಾಟನೆಗೆ ನನ್ನನ್ನು ಬಹಳ ಪ್ರೀತಿಯಿಂದ ಬರಮಾಡಿಕೊಂಡು ಗೌರವಿಸಿದ್ದೀರಿ.
- ಅದಕ್ಕಾಗಿ ತಮ್ಮೆಲ್ಲರಿಗೂ ಕೃತಜ್ಞತಾಪೂರ್ವಕ ಧನ್ಯವಾದಗಳು.
- ಚಾಮುಂಡಿ ಬೆಟ್ಟದ ಶ್ರೀ ಚಾಮುಂಡೇಶ್ವರಿ ದೇವಿ ಹಾಗೂ ನಾಡ ದೇವತೆ ಶ್ರೀ ಕನ್ನಡ ಭುವನೇಶ್ವರಿ ದೇವಿ ಇವರ ಪವಿತ್ರ ಸನ್ನಿಧಿಯಲ್ಲಿ ಈ ವರ್ಷದ ಮೈಸೂರು ದಸರಾ ಮಹೋತ್ಸವವನ್ನು ನಿಮ್ಮೆಲ್ಲರ ಸಮ್ಮುಖದಲ್ಲಿ ಅತ್ಯಂತ ಸಂತೋಷದಿಂದ ಉದ್ಘಾಟಿಸಿದ್ದೇನೆ.
- ಇಂದಿಗೆ 74 ವರ್ಷಗಳ ಹಿಂದೆ, 1942 ರಲ್ಲಿ ನಾನು ಮೊಟ್ಟಮೊದಲು ದಸರಾ ಉತ್ಸವವನ್ನು ನೋಡಿದ್ದು ಇನ್ನೂ ಕಣ್ಣಿಗೆ ಕಟ್ಟಿದಂತಿದೆ.
- ನಾನು ನಾಲ್ಕನೆಯ ತರಗತಿಯಲ್ಲಿದ್ದಾಗ ಗೆಳೆಯರೊಡನೆ ಬಂದಿದ್ದೆ.

• ಆಗ ಉತ್ತರ ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟ ಆಗಲೇ ಜೋರಾಗಿ ಸಾಗಿತ್ತು.
• ಮೈಸೂರು ಸಂಸ್ಥಾನಕ್ಕೂ ಅದರ ಬಿಸಿ ಆಗಲೇ ತಟ್ಟಿತ್ತು.
• ಆಗ ನಾವೆಲ್ಲ ವಿದ್ಯಾರ್ಥಿಗಳು ಗಾಂಧೀಟೋಪ್ಪಿಗೆ ಹಾಕುತ್ತಿದ್ದೆವು.
• ಇದೇ ಕಾರಣಕ್ಕಾಗಿ ಪ್ರೇಕ್ಷಣೀಯ ಸ್ಥಳಗಳಿಗೆ ಎಲ್ಲಿ ಹೋಗಬೇಕಾದರೂ ಮೊದಲೇ
ಅನುಮತಿ ಪಡೆಯಬೇಕಾಗುತ್ತಿತ್ತು.
• ಮುಖ್ಯವಾಗಿ ನನಗೆ ಚಾಮುಂಡಿ ಬೆಟ್ಟದಲ್ಲಿಯ 'ಲಲಿತಾದ್ರಿ' ಯನ್ನು ನೋಡಬೇಕಾಗಿತ್ತು.

3.
• ಕುವೆಂಪು ಅವರು ಬರೆದ 'ಲಲಿತಾದ್ರಿ' ಕವಿತೆಯನ್ನು ನಾನು ಹೈಸ್ಕೂಲಿನಲ್ಲಿದ್ದಾಗಲೇ ಓದಿ ಮೆಚ್ಚಿಕೊಂಡಿದ್ದೆ.
• ಮೈಸೂರಿನ ಸೊಬಗನ್ನು ಸವಿಯಬೇಕಾದರೆ 'ಲಲಿತ ಲಲಿತಾದ್ರಿಯಲಿ ನಿಂತು ನೋಡು' ಎಂದಿದ್ದರು ಕುವೆಂಪು.
• ಆ ಕವಿತೆಯ ಕೆಲವು ಸಾಲುಗಳು ಇನ್ನೂ ನನ್ನ ನೆನಪಿನಲ್ಲಿವೆ.

"ತಾರೆಗಳ ತವರೂರು
ಸಿಂಗಾರದ ಮೈಸೂರು
ಕನ್ನಡದ ಕುಶಲತೆಗೆ
ಕನ್ನಡದ ರಸಿಕತೆಗೆ
ಕನ್ನಡದ ನಿಪುಣತೆಗೆ
ಕನ್ನಡಿಯು ಮೈಸೂರು"

4.
• ಕರ್ನಾಟಕ ರಾಜ್ಯೋದಯದ ನಂತರ, ಮೈಸೂರು ದಸರಾ ಕವಿಗೋಷ್ಠಿಯಲ್ಲಿ ನಾನು 3–4 ಸಲ ಭಾಗವಹಿಸಿದ್ದುಂಟು.

• 2005 ರಲ್ಲಿ ದಸರಾ ಕವಿಗೋಷ್ಠಿಯ ಉದ್ಘಾಟನೆಯನ್ನೂ ನೆರವೇರಿಸಿದ್ದೆ.

- 74 ವರ್ಷಗಳ ಹಿಂದೆ ಕುವೆಂಪು ಪ್ರೇರಣೆಯಿಂದ ನಾನು ಯಾವ ಲಲಿತಾದ್ರಿಯಲ್ಲಿ ನಿಂತು ಮೈಸೂರಿನ ಸೊಬಗನ್ನು ಸವಿದಿದ್ದೇನೋ, ಅದೇ ಚಾಮುಂಡಿ ಬೆಟ್ಟದಲ್ಲಿ ಈ ಸಲದ ದಸರಾ ಮಹೋತ್ಸವವನ್ನು ಉದ್ಘಾಟಿಸುವ ಭಾಗ್ಯ ನನ್ನದಾಗಿದೆ.

- ಇಂಥ ಅಪರೂಪದ ಅವಕಾಶವನ್ನೊದಗಿಸಿದ ಸನ್ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಸಿದ್ದರಾಮಯ್ಯನವರಿಗೂ, ದಸರಾ ಮಹೋತ್ಸವ ಸಮಿತಿಯ ಎಲ್ಲಾ ಸದಸ್ಯರಿಗೂ ನಾನು ಮತ್ತೊಮ್ಮೆ ಹೃತ್ಪೂರ್ವಕ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ರಾಜ್ಯದಲ್ಲಿ ಬರಗಾಲದ ಛಾಯೆ ದಟ್ಟವಾಗಿ ಆವರಿಸಿಕೊಳ್ಳುತ್ತಿರುವ ಹಿನ್ನೆಲೆಯಲ್ಲಿ, ಈ ಸಲದ ದಸರಾ ಉತ್ಸವವನ್ನು ಸರಳವಾದ 'ಸಾಂಪ್ರದಾಯಕ' ರೀತಿಯಲ್ಲಿ ಆಚರಿಸಲು ನಿರ್ಧರಿಸಿದ, ಕರ್ನಾಟಕ ಸರಕಾರ ಯೋಗ್ಯವಾದ ನಿರ್ಣಯವನ್ನೇ ತೆಗೆದುಕೊಂಡಿದೆ. ಈಗಷ್ಟೇ ಅಲ್ಲ, ಇನ್ನು ಮುಂದೆಯೂ ಸರಕಾರದ ಯಾವುದೇ ಕಾರ್ಯಕ್ರಮ, ನಿರಾಡಂಬರವಾಗಿ ಜರುಗಿ, ಸರಳತೆಯ ಸಹಜ ಸೌಂದರ್ಯವನ್ನು ಕಾಪಾಡಿಕೊಳ್ಳುವುದೆಂದು ನಾನು ಆಶಿಸಿದ್ದೇನೆ. ರಾಮಕೃಷ್ಣ ಪರಮಹಂಸರು ತಮ್ಮ ಶಿಷ್ಯರಿಗೆ ಸದಾಕಾಲ ಹೇಳುತ್ತಿದ್ದರು: "ಮನುಷ್ಯ ಸರಳನಾಗುವುದು, ಅಷ್ಟೇನೂ ಸುಲಭವಲ್ಲ; ಅದು ಅನೇಕ ಜನ್ಮಗಳ ತಪಸ್ಸಿನ ಫಲ" ಎಂದು 'ಶ್ರೀ ಸಾಮಾನ್ಯನೇ ಭಗವನ್ಮಾನ್ಯಂ' ಎಂಬ ಕುವೆಂಪು ವಾಣಿಯನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಒಂದು ಕಾಲಕ್ಕೆ ಕನ್ನಡ ನಾಡು, ತನ್ನ ರಾಜಕೀಯ ಸ್ವಾತಂತ್ರ್ಯವನ್ನು ಕಳೆದುಕೊಂಡು, ಪರದಾಸ್ಯದ ನೊಗವನ್ನು ಹೊತ್ತು ನಿಂತಾಗ, ಈ ನಾಡಿನ ಬಹುಭಾಗ ತುಂಡು ತುಂಡುಗಳಾಗಿ, ಬೇರೆ ಬೇರೆ ಆಡಳಿತಕ್ಕೆ ಸೇರಿ, ಕನ್ನಡಿಗರಲ್ಲಿ ಪರಸ್ಪರ ಬಾಂಧವ್ಯ ಏರ್ಪಡದೆ, ತಮ್ಮ ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಂದ ದೂರವಾಗುವ ದುರ್ಭರ ಪ್ರಸಂಗವನ್ನು ಎದುರಿಸ ಬೇಕಾಯಿತು. ಪರಭಾಷೆ, ಪರಕೀಯ ಸಂಸ್ಕೃತಿಗಳ ಒತ್ತಡಕ್ಕೆ ಒಳಗಾಗಿ ಕನ್ನಡ ಜನ, ತಮ್ಮ ಅಸ್ತಿತ್ವದ ವಾಸ್ತವ ಸ್ವರೂಪವನ್ನೇ ಮರೆತುಬಿಟ್ಟಿದ್ದರು. ಇಂತಹ ಕಾಲದಲ್ಲಿ ನಾಡಿನ ಜನರನ್ನೆಲ್ಲ ಒಂದುಗೂಡಿಸಿ ನಲಿಯುವ ನಾಡಹಬ್ಬದ ಆಚರಣೆಗೆ ಅವಕಾಶವೆಲ್ಲಿ?

ಮೈಸೂರಿನ ಒಡೆಯರು ದಸರಾ ಉತ್ಸವದ ಪರಂಪರೆಯನ್ನು ಮುಂದುವರಿಸಿದ್ದರಾದರೂ, ತಮ್ಮತನವನ್ನು ಮರೆತಿದ್ದ ಮಿಕ್ಕೆಡೆಯ ಕನ್ನಡಿಗರನ್ನು, ತನ್ನೆಡೆಗೆ ಆಕರ್ಷಿಸಲು, ಅದು ಅಷ್ಟು ಸಮರ್ಥವಾಗಿರಲಿಲ್ಲ. ಒಂದು ಕಾಲದಲ್ಲಿ ಕನ್ನಡಿಗರ ಹೃದಯಗಳನ್ನೆಲ್ಲ ತನ್ನೆಡೆಗೆ ಸೆಳೆದುಕೊಂಡಿದ್ದ ಹಂಪೆಯ ತುಂಗಭದ್ರೆ, ಕಾಲದ ದುರ್ವಿಪಾಕದ ಕಾರಣವಾಗಿ, ಮೈಸೂರು ಪ್ರದೇಶದಿಂದ ಮಿಕ್ಕ ಕನ್ನಡ ಪ್ರದೇಶವನ್ನು ವಿಭಾಗಿಸಿ ಗೆರೆಕೊರೆದಂತೆ ಪರಸ್ಪರ ಪರಿಚಯ ತಪ್ಪಿಹೋಗುವಂತೆ ಮಾಡಿದ್ದಳು. ಸರ್ವಸಂಪದ್ಭರಿತ ಭಾಷೆ. ಪ್ರಭಾವಶಾಲಿಯಾದ ಸಾಹಿತ್ಯ, ವೀರ ವೈಭವದ ಇತಿಹಾಸ – ಇಷ್ಟೆಲ್ಲ ತಮ್ಮವಾಗಿದ್ದರೂ ಅದರ ಅರಿವು ಯಾರಿಗೂ ಇರದಂಥ ಪರಿಸ್ಥಿತಿ ಒದಗಿದ್ದಿತು.

ಇಂಥ ಸಂದರ್ಭದಲ್ಲಿ ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ಸ್ಥಾಪನೆಗೊಂಡು, ಅಖಿಲ ಕರ್ನಾಟಕ ಏಕೀಕರಣದ ಕನಸನ್ನು ಕಂಡು, ಅದಕ್ಕಾಗಿ ಸಾಂಸ್ಕೃತಿಕ ಹೋರಾಟವನ್ನು ಪ್ರಾರಂಭಿಸಿತು. ಆಲೂರು ವೆಂಕಟರಾಯರ 'ಕರ್ನಾಟಕ ಗತವೈಭವ' ಗ್ರಂಥ ಬೆಳಕಿಗೆ ಬಂದು, ಕನ್ನಡಿಗರ ಸ್ವಾಭಿಮಾನ, ಸಂಸ್ಕೃತಿ, ಪ್ರಜ್ಞೆಯನ್ನು ಬಡಿದೆಬ್ಬಿಸಿತು. 'ಕರ್ನಾಟಕತ್ವದ ವಿಕಾಸ' ಎಂಬ ಪರಿಕಲ್ಪನೆಯನ್ನು ಕೊಟ್ಟ ಆಲೂರು ವೆಂಕಟರಾಯರು, ರಾಜಕಾರಣ, ಧರ್ಮ, ವಾಙ್ಮಯ, ಇತಿಹಾಸ, ಕಲೆ ಉದ್ದಿಮೆ ಮೊದಲಾದ ಯಾವತ್ತು ವಿಷಯಗಳನ್ನು 'ಕರ್ನಾಟಕತ್ವ' ಎಂಬ ಒಂದು ಶಬ್ದದಲ್ಲಿ ಸೇರ್ಪಡೆ ಮಾಡಿ ಕನ್ನಡಿಗರಿಗೆ ದಾರಿ ತೋರಿಸಿದರು. 'ಕರ್ನಾಟಕತ್ವ' ಎಂಬುದು ಫೋಕಸ್ಸಿಂಗ್ ಲೆನ್ಸ್ ಇದ್ದ ಹಾಗೆ ಕಿರಣಕೇಂದ್ರದ ಆ ಗಾಜಿನೊಳಗಿಂದ ಭರತಭೂಮಿ ಮಾತ್ರವೇ ಏಕೆ, ವಿಶ್ವವೇ ನಮಗೆ ಗೋಚರಿಸಬಲ್ಲದು. ಕನ್ನಡಿಗರು ಈ ಬಗೆಯ ಕರ್ನಾಟಕತ್ವವನ್ನು ಬೆಳಸಿಕೊಳ್ಳದೆ ಪೂರ್ಣ ಭಾರತೀಯರಾಗುವುದು ಸಾಧ್ಯವಿಲ್ಲವೆಂಬುದನ್ನು ಅವರು ಖಚಿತಪಡಿಸಿದರು.

ಕರ್ನಾಟಕದ ಸಾಂಸ್ಕೃತಿಕ ಕೇಂದ್ರಗಳಲ್ಲಿ ಒಂದಾದ ಮೈಸೂರಿನಲ್ಲಿ, ನಡೆಯುತ್ತಿರುವ ಈ ದಸರಾ ಮಹೋತ್ಸವ, ವಸುಧೆಯ ಒಳಗಿನ ಒಂದು ಬಿಂದುವಾಗಿ, ತನ್ನೊಳಗೆ ಆ ವಸುದೆಯನ್ನೇ ಅರಗಿಸಿಕೊಂಡ 'ಕನ್ನಡ'ದ ಒಂದು ಭವ್ಯ ಪ್ರತಿಮೆಯಾಗಿ ಕಂಗೊಳಿಸುತ್ತಿದೆ. ಇಂಥ ಈ ಕನ್ನಡ ನಾಡಿಗೆ ಅನೇಕ ಶತಮಾನಗಳ ಒಂದು ಸುದೀರ್ಘವಾದ ಚರಿತ್ರೆಯಿದೆ, ಪರಂಪರೆಯಿದೆ. ಇದನ್ನು ಕಟ್ಟಿಬೆಳೆಸಿದ ಒಂದು ಹಿರಿಯ ಸಮುದಾಯವಿದೆ. ಈ ಸಮುದಾಯದ ಮನಸ್ಸು ಕಂಡ ಕನಸುಗಳು, ಆದರ್ಶಗಳು, ಚಿಂತನೆಗಳು, ಸವಾಲುಗಳು, ಸಾಧನೆಗಳು – ಇವೆಲ್ಲವುಗಳಿಂದ ರೂಪಿತವಾದ ಒಂದು ಮನೋಧರ್ಮವಿದೆ. ಒಂದು ಜೀವನ ಕ್ರಮವಿದೆ. ಅದನ್ನೇ 'ಕನ್ನಡ ಸಂಸ್ಕೃತಿ' ಎಂದು ನಾವು ಕರೆಯಬಹುದು.

ಮೈಸೂರು ಒಡೆಯರು ನೆರವೇರಿಸುತ್ತ ಬಂದ ದಸರಾ ಉತ್ಸವಕ್ಕೆ ಮೂಲವಾದ, ವಿಜಯನಗರದ ರಾಜರ ನವರಾತ್ರಿ ಉತ್ಸವದ ಚಿತ್ರ, ಧಾರವಾಡದ ನಮ್ಮ ಹಿರಿಯ ಸಾಹಿತಿಗಳ ಹಾಗೂ ಚಿಂತಕರ ಮನದಲ್ಲಿ ಮೂಡಿ ಆಚರಣೆಯಲ್ಲಿ 'ನಾಡಹಬ್ಬ' ಎಂದು ಹೆಸರಾಯಿತು. 1925 ರಲ್ಲಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಪ್ರಾರಂಭವಾದ ನಾಡಹಬ್ಬ ಉತ್ತರ ಕರ್ನಾಟಕ, ನಿಜಾಮ ಕರ್ನಾಟಕ ಹಾಗೂ ಹೊರನಾಡುಗಳಲ್ಲಿ ವರ್ಷದಿಂದ ವರ್ಷಕ್ಕೆ ಲೋಕಪ್ರಿಯವಾಗಿ ಜನತೆಯಲ್ಲಿ ಸಾಂಸ್ಕೃತಿಕ ಜಾಗೃತಿಗೆ ಕಾರಣವಾಯಿತಲ್ಲದೆ ಕರ್ನಾಟಕ ಏಕೀಕರಣದ ಧ್ವನಿಯನ್ನು ಅದು ಗಟ್ಟಿಗೊಳಿಸಿತು. ಕೇವಲ ರಾಜಕೀಯ ಕಾಯಿದೆಗಳು ಜನರನ್ನು ಸುಸಂಸ್ಕೃತರನ್ನಾಗಿ ಮಾಡಲಾರವು. ಸಂಸ್ಕೃತಿ ಪ್ರಸಾರವಾಗದೆ ಜನರಲ್ಲಿ ಸುಖ, ಸಮಾಧಾನಗಳು ನೆಲೆಯೂರಿ ನಿಲ್ಲಲಾರವು. ಆದ್ದರಿಂದ ದಸರಾ ಸಂದರ್ಭದಲ್ಲಿ ಮೈಸೂರಿನಲ್ಲಿ ನಡೆಯುತ್ತಿರುವ ಈ ಸಾಂಸ್ಕೃತಿಕ ಮಹೋತ್ಸವ ಕರ್ನಾಟದ ಎಲ್ಲಾ ಜಿಲ್ಲಾ ಸ್ಥಳಗಳಲ್ಲಿಯೂ ಆಯಾ ಪ್ರಾದೇಶಿಕ ವೈಶಿಷ್ಟ್ಯಗಳೊಂದಿಗೆ ನಡೆಯುವಂತೆ ಆರ್ಥಿಕ ನೆರವಿನೊಂದಿಗೆ ಸರಕಾರ ನೋಡಿಕೊಳ್ಳುವುದೆಂದು ನಾನು ಆಶಿಸಿದ್ದೇನೆ.

ಕನ್ನಡ ನಾಡಿನ ಇತಿಹಾಸ, ಧರ್ಮ, ಸಾಹಿತ್ಯ, ಕಲೆ – ಹೀಗೆ ಎಲ್ಲಾ ರಂಗಗಳಲ್ಲಿ ಸಮನ್ವಯದ ಅಂಶವೇ ಪ್ರಮುಖವಾಗಿ ಕಂಡು ಬರುತ್ತದೆ. "ಪರವಿಚಾರವನ್ನೂ ಪರಧರ್ಮವನ್ನೂ ಸೈರಿಸಿಕೊಂಡ ಬಾಳು ಬಂಗಾರವಾಗುತ್ತದೆ" ಎಂಬ ಮಾತು 9ನೇ ಶತಮಾನದ 'ಕವಿರಾಜ ಮಾರ್ಗ'ದಲ್ಲಿಯೇ ವ್ಯಕ್ತವಾಗಿದೆ. ಪ್ರಾದೇಶಿಕ ಭೇದಗಳೇನಿದ್ದರೂ ಈ ಸಂಸ್ಕೃತಿಯ ಅಭಿವ್ಯಕ್ತಿಗೆ ವೈವಿಧ್ಯವನ್ನು ಒದಗಿಸುತ್ತಲೇ ಬಂದಿವೆ. ಹೀಗಿದ್ದೂ ಇಂದು ದೇಶದಲ್ಲಿ ವಿಚ್ಛಿದ್ರಕಾರಕ ಶಕ್ತಿಗಳ ಪ್ರಾಬಲ್ಯ, ದಿನದಿಂದ ದಿನಕ್ಕೆ ಹೆಚ್ಚುತ್ತಿರುವುದು ಬಹಳ ಆತಂಕಕಾರಿಯಾಗಿದೆ. ಒಡೆದು ಹೋಗುತ್ತಿರುವ ಮನುಷ್ಯ ಸಂಬಂಧಗಳನ್ನು ಮಾನವೀಯತೆಯ ಸೂತ್ರದಿಂದ ಬೆಸೆಯುವ ಕಾರ್ಯ ನಿರಂತರ ಮುಂದುವರೆಯಬೇಕಾಗಿದೆ. ಈ ದೇಶದ ಸಂಸ್ಕೃತಿಯ ಬಹುಮುಖತ್ವವನ್ನು ಕಾಪಾಡಿಕೊಂಡು ಹೋಗುವುದರಿಂದ ಮಾತ್ರ, ಭಾರತಿಯರ ಬದುಕು ಭದ್ರವೂ ಸುಂದರವೂ ಆಗಬಲ್ಲದು.

ಕನ್ನಡಿಗರು ಎಂದೂ ಭಾಷಾಂಧರಾಗಿರಲಿಲ್ಲ. 'ಸರ್ವಭಾಷಾ ಸರಸ್ವತಿ' ಎಂಬ ಪರಿಕಲ್ಪನೆಯನ್ನು ಜಗತ್ತಿಗೇ ಕೊಟ್ಟವರು ಕನ್ನಡಿಗರು. ಆದರೂ ಅಗ್ರಪೂಜೆ ಸಲ್ಲಬೇಕಾದದ್ದು ನಮ್ಮ ತಾಯ್ನಾಡಿಗೆ. ಕನ್ನಡವನ್ನು ಪೂರ್ತಿ ತೊರೆದು ಬಿಟ್ಟು 'ಇಂಗ್ಲಿಷ್ ಒಂದೇ ನಮ್ಮ ಪರಮ ದೈವ' ಎಂದರೆ ಮಾತ್ರ ದುರಂತ ತಪ್ಪಿದ್ದಲ್ಲ. ದೇಶಭಾಷೆಗಳ ವಿಷಯದಲ್ಲಿ ಗಾಂಧೀಜಿ ಆಡಿದ ಒಂದು ಮಾತನ್ನು ಇಲ್ಲಿ ನೆನೆಯಬಹುದು. "ಯಾರು ಎಷ್ಟೇ ಪರೋಪಕಾರ ಬುದ್ಧಿಯಿಂದ ಯಾವ ತರಹದ ಸ್ವರಾಜ್ಯವನ್ನೇ ಕೊಡಲಿ, ನಮ್ಮ ತಾಯಂದಿರಾಡುವ ಭಾಷೆಯ ವಿಷಯದಲ್ಲಿ, ನಮ್ಮ ಮನದಲ್ಲಿ ಆದರ ಬುದ್ಧಿ ಇಲ್ಲದಿದ್ದರೆ ನಾವು ನಿಜವಾದ ಸ್ವರಾಜ್ಯ ಭೋಗಿಗಳಾಗಲಾರೆವು". ಇಂದು ಕನ್ನಡ ಪ್ರಜ್ಞೆ ತನ್ನ ಸ್ವೋಪಜ್ಞತೆಯಿಂದ ವಿಶ್ವಪ್ರಜ್ಞೆಯಾಗಿ, ವಿಶ್ವಪ್ರಜ್ಞೆ ಕನ್ನಡ ದೇಶೀಪ್ರಜ್ಞೆಯೊಂದಿಗೆ ಪ್ರವಹಿಸಿ ಸಮನ್ವಯಗೊಂಡು ಸಾಕ್ಷಾತ್ಕಾರಗೊಳ್ಳುವ ಅಗತ್ಯವಿದೆ. ಮೈಸೂರಿನ ಈ ದಸರಾ ಉತ್ಸವ ನೀಡಬೇಕಾದ ಸಂದೇಶಗಳಲ್ಲಿ ಇದು ಬಹಳ ಮುಖ್ಯವಾದುದು ಎಂದು ನಾನು ಭಾವಿಸಿದ್ದೇನೆ.

ಇದೇ ಸಂದರ್ಭದಲ್ಲಿ, ಕೇಂದ್ರ ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆ, ' ರಾಷ್ಟ್ರೀಯ ಶಿಕ್ಷಣ ನೀತಿ – 2016 ರ ಕರಡನ್ನು ಸಾರ್ವಜನಿಕರ ಚರ್ಚೆಗೆ ಬಿಡುಗಡೆ ಮಾಡಿದೆ. ಅದರಲ್ಲಿ ಕೆಲವು ವಿವಾದಾಸ್ಪದ ಸಂಗತಿಗಳಿದ್ದರು, ಶಿಕ್ಷಣದ ಪ್ರಾಥಮಿಕ ಹಂತದಲ್ಲಿ ಬೋಧನ ಮಾಧ್ಯಮವಾಗಿ ಮಾತೃಭಾಷೆ ಅಥವಾ ಸ್ಥಳೀಯ ಭಾಷೆಯಿರಬೇಕೆಂದೂ, ಸರ್ಕಾರಿ ಶಾಲೆಗಳಲ್ಲಿ ಪೂರ್ವ ಪ್ರಾಥಮಿಕ (ಎಲ್.ಕೆ.ಜಿ, ಯು.ಕೆ.ಜಿ) ಶಿಕ್ಷಣವನ್ನು ಪ್ರಾರಂಭಿಸಬೇಕೆಂದೂ ಸೂಚಿಸಿರುವುದು ಸ್ವಾಗತಾರ್ಹ. ರಾಜ್ಯ ಸರ್ಕಾರಗಳು ಆಯಾ ರಾಜ್ಯಗಳ ರಾಜ್ಯ ಭಾಷೆಯನ್ನೇ ಕಡ್ಡಾಯವಾಗಿ ಪ್ರಾಥಮಿಕ ಹಂತದಲ್ಲಿ ಶಿಕ್ಷಣ ಮಾಧ್ಯಮವಾಗಿ ಮಾಡಬೇಕು. ಅವಶ್ಯವೆನಿಸಿದಲ್ಲಿ ಸಂವಿಧಾನದ ತಿದ್ದುಪಡಿಯನ್ನೂ ಮಾಡಬಹುದಾಗಿದೆ.

ಇದೇ ರೀತಿ ಕೇಂದ್ರ ಸರಕಾರ 'ರಾಷ್ಟ್ರೀಯ ಜಲನೀತಿ' ಯೊಂದನ್ನು ರೂಪಿಸುವುದು ಅತ್ಯಂತ ಅಗತ್ಯವಾಗಿದೆ. ಭಾರತದ ಎಲ್ಲಾ ನದಿಗಳ ಬಗೆಗೂ ಅಂತರರಾಜ್ಯ ವಿವಾದಗಳಿವೆ. ಪ್ರಸ್ತುತ ಕರ್ನಾಟಕದಲ್ಲಿ ಮಹಾದಾಯಿ ಕಳಸಾಬಂಡೂರಿ ನಾಲಾ ಜೋಡಣೆಗೆ ಸಂಬಂಧಪಟ್ಟ ಹೋರಾಟವಂತೂ ನಿರಂತರ ಒಂದು ವರ್ಷದಿಂದ ಜನಾಂದೋಲನವಾಗಿ ನಡೆದಿದ್ದು ನಾಡಿನಲ್ಲಿ ಅತ್ಯಂತ ಪ್ರಕ್ಷುಬ್ದ ಪರಿಸ್ಥಿತಿ ತಲೆದೋರಿದೆ. ಮಹಾದಾಯಿ ನದಿ ನೀರಿನ ಹಂಚಿಕೆ ವಿವಾದವನ್ನು ಮಾತುಕತೆ ಮೂಲಕ ಬಗೆಹರಿಸಿಕೊಳ್ಳುವುದು ಸೂಕ್ತವೆಂದು, ಈಚೆಗೆ ಮಹಾದಾಯಿ ನ್ಯಾಯಮಂಡಳಿಯು ಮೂರೂ ರಾಜ್ಯಗಳ ಮುಖ್ಯಮಂತ್ರಿಗಳಿಗೆ ಸೂಚಿಸಿದ್ದು, ನಮ್ಮ ರಾಜ್ಯದ ಮುಖ್ಯಮಂತ್ರಿಗಳು ಅದನ್ನು ಸಂತೋಷದಿಂದ ಸ್ವಾಗತಿಸಿದ್ದಾರೆ. ನ್ಯಾಯಮಂಡಳಿಯ ಈ ಸಲಹೆಯನ್ನು ರಾಜಕೀಯಕ್ಕೆ ಬಳಸಿಕೊಳ್ಳದೇ, ಪ್ರಧಾನಿಯವರು ಮಧ್ಯಸ್ಥಿಕೆ ವಹಿಸಿ ಸೌಹಾರ್ದತೆಯಿಂದ ಬಗೆಹರಿಸಿ ಪರಸ್ಪರ ಬಾಂಧವ್ಯವನ್ನು ಹೆಚ್ಚಿಸುವರೆಂದು ಎಲ್ಲರ ಅಪೇಕ್ಷೆಯಾಗಿದೆ. ಕಾವೇರಿ ಸಂದರ್ಭದಲ್ಲಿ ತಮಿಳುನಾಡು ಮಗ್ಗುಲ ಮುಳ್ಳಾಗಿ ಆಗಾಗ ಚುಚ್ಚುತ್ತಲೇ ಇರುತ್ತದೆ. ಸದ್ಯಕ್ಕೆ 'ಸಂಕಷ್ಟ ಸೂತ್ರ' ವೊಂದನ್ನು ಸಿದ್ದಗೊಳಿಸುವುದೇ ಇದಕ್ಕೆ ತುರ್ತು ಪರಿಹಾರವೆಂದು ತೋರುತ್ತದೆ. ಪ್ರಧಾನಿಯವರ ಮಧ್ಯಸ್ಥಿಕೆಗೆ ಕಾನೂನಿನಲ್ಲಿಯೂ ಅವಕಾಶವಿದೆ. ನ್ಯಾಯಾಲಯ ಕೂಡ ಮಾನವೀಯ

ದೃಷ್ಟಿಯಿಂದ ಇದನ್ನು ಪರಿಶೀಲಿಸುವ ಅಗತ್ಯವಿದೆ. ಹಾಗೆಯೇ ತಮ್ಮ ಪಕ್ಷದ ಹಿತಕ್ಕಿಂತ ರಾಜ್ಯದ ಹಿತ ಮುಖ್ಯವೆಂದು ನಮ್ಮ ರಾಷ್ಟ್ರೀಯ ಪಕ್ಷಗಳು ಭಾವಿಸಬೇಕು.

ಅಂತರರಾಜ್ಯ ನೀರು ಹರಿಯುವ ಪ್ರದೇಶದಲ್ಲಿ ಪ್ರತಿ ರಾಜ್ಯಕ್ಕೆ ತನ್ನ ಪ್ರದೇಶದೊಳಗೆ, ಒಂದು ಸಮುಚಿತ ಸಮತೋಲನದ ನೀರಿನ ಪಾಲು ಬಳಸಿಕೊಳ್ಳುವ ಹಕ್ಕಿದೆ ಎಂದು, 1995 ರಲ್ಲಿ ಹೆಲ್ಸಿಂಕಿಯಲ್ಲಿ ನಡೆದ ಅಂತರಾಷ್ಟ್ರೀಯ ಕಾನೂನು ಸಂಘದ 52ನೇ ಸಮಾವೇಶದಲ್ಲಿ ನೀರು ಹಂಚಿಕೆ ಕುರಿತು ಅಂತರಾಷ್ಟ್ರೀಯ ನೀತಿಯನ್ನು ರೂಪಿಸಲಾಗಿದೆ. ಅದರ ಆಧಾರದ ಮೇಲೆ ತಕ್ಕ ಮಾನದಂಡಗಳನ್ನು ರೂಪಿಸಿ ಅಂತರರಾಜ್ಯ ಜಲವಿವಾದಗಳನ್ನು ಕೇಂದ್ರ ಸರಕಾರ ಬಗೆಹರಿಸಬಹುದಾಗಿದೆ.

ಸುಸಂಸ್ಕೃತವೆಂದು ಹೇಳಿಕೊಳ್ಳುವ ನಮ್ಮ ನಾಡಿನಲ್ಲಿ ಆಗಬಾರದ ದುರ್ಘಟನೆಗಳು ಸಂಭವಿಸಿ ಜನಜೀವನ ತಲ್ಲಣಗೊಂಡಿದೆ. ಕನ್ನಡ ನಾಡಿನ ಶ್ರೇಷ್ಠ ಸಂಶೋದಕರಲ್ಲಿ ಒಬ್ಬರಾದ ಡಾ. ಎಂ.ಎಂ.ಕಲಬುರ್ಗಿಯವರ ಅಮಾನುಷ ಹತ್ಯೆ. ಅಸಹಿಷ್ಣುತೆಯ ದ್ಯೋತಕವಾಗಿ ಇಡೀ ಪ್ರಪಂಚದ ತುಂಬ ಚರ್ಚೆಗೆ ಕಾರಣವಾಗಿದೆ. ಬಹುಮುಖಿ ಸಮಾಜದ ಭಾರತದ ಬಹುತ್ವವನ್ನು ನಾವು ಹೆಮ್ಮೆಯಿಂದ ಹೇಳಿಕೊಳ್ಳಬಹುದು. ಆದರೆ ಅದನ್ನು ಕಾಪಾಡಿಕೊಳ್ಳಲು ಪರಸ್ಪರ ಸಹನೆ, ಸೈರಣೆ, ಪ್ರೀತಿ, ವಿಶ್ವಾಸ, ಗೌರವಗಳಿರಬೇಕು. ಪ್ರಜಾಪ್ರಭುತ್ವದ ನಿಜವಾದ ಮೌಲ್ಯಗಳೇ ಇವು. ವಿಚಾರವಾದ, ಅಭಿವ್ಯಕ್ತಿ ಸ್ವಾತಂತ್ರ್ಯ ನಾಗರಿಕ ಸಮಾಜದ ಮೂಲಭೂತ ಅವಶ್ಯಕತೆಗಳಾಗಿವೆ. ಅವುಗಳ ರಕ್ಷಣೆ ಪ್ರಜ್ಞಾವಂತ ಸಮಾಜದ ಲಕ್ಷಣ. ವೈಚಾರಿಕವಾಗಿ ಪ್ರಬುದ್ಧವಾದ ಸಮಾಜ ಎಂಥ ಸಂದಿಗ್ಧತೆಗಳನ್ನು ಧೈರ್ಯವಾಗಿ ಎದುರಿಸಬಲ್ಲದು. ಡಾ. ಕಲಬುರ್ಗಿಯವರು ಇಂದು ಭೌತಿಕವಾಗಿ ನಮ್ಮೆದುರು ಇರಲಿಕ್ಕಿಲ್ಲ. ಆದರೆ ಅವರೊಳಗಿನ ಸತ್ಯ ಶೋಧಕ, ದಿಟ್ಟ ಚಿಂತಕ, ಉನ್ನತ ಧ್ಯೇಯವಾದಿ ಚಿರಂಜೀವಿಯಾಗಿಯೇ ನಮ್ಮ ಜೊತೆಗಿದ್ದಾನೆ.

ಡಾ. ಕಲಬುರ್ಗಿಯವರ ಹತ್ಯೆ ನಡೆದು ಒಂದು ವರ್ಷವೇ ಕಳೆದಿದ್ದರೂ ಅದರ ತನಿಖೆ ಪೂರ್ಣಗೊಳ್ಳದಿರುವುದು ಅತ್ಯಂತ ವಿಷಾದದ ಸಂಗತಿ. ಸರಕಾರ ಶೀಘ್ರವಾಗಿ ತನಿಖೆಯನ್ನು ಪೂರ್ಣಗೊಳಿಸಿ ಅಪರಾಧಿಗಳನ್ನು ಬಂಧಿಸಲು ತ್ವರಿತ ಕ್ರಮ ಕೈಗೊಳ್ಳಬೇಕೆಂಬುದು ನಮ್ಮೆಲ್ಲರ ಅಗ್ರಹದ ಅಪೇಕ್ಷೆ.

ಸಾಂಪ್ರದಾಯಿಕವಾದ ಹಲವಾರು ಅವೈಚಾರಿಕ ಸಂಗತಿಗಳು, ಮೂಢನಂಬಿಕೆಗಳು, ಇಂದಿಗೂ ನಮ್ಮ ಬದುಕನ್ನು ವ್ಯಾಪಿಸಿಕೊಂಡು ನಾಡಿನ ಪ್ರಗತಿಗೆ ಕಾಲ್ತೊಡಕಾಗಿ ಪರಿಣಮಿಸಿವೆ. ಸಾಮಾಜಿಕ ನ್ಯಾಯ, ಸಮತೆ, ಜಾತ್ಯತೀತತೆ ಮೊದಲಾದವು, ಸಂವಿಧಾನದಲ್ಲಿ ಘೋಷಿತಗೊಂಡಿದ್ದರೂ ಅವು ಬದುಕಿನ ಮೌಲ್ಯಗಳಾಗಿ ಪರಿಣಮಿಸಿಲ್ಲ. ವಿಜ್ಞಾನದಿಂದ ಅನೇಕ ಸೌಲಭ್ಯಗಳನ್ನು ಪಡೆದಿದ್ದೇವೆಯೋ ಹೊರತು ವೈಜ್ಞಾನಿಕ ಮನೋಧರ್ಮವನ್ನು ನಮ್ಮ ಜೀವನಕ್ರಮದಲ್ಲಿ ಅಳವಡಿಸಿಕೊಳ್ಳುವ ಆಸಕ್ತಿ ತೋರಿಸಿಲ್ಲ. ಆದ್ದರಿಂದ ಪ್ರಶ್ನಿಸುವ, ಪರೀಕ್ಷಿಸುವ, ಸತ್ಯಾಸತ್ಯತೆಗಳನ್ನು ಪರಿಶೀಲಿಸುವ ಗುಣಕ್ಕೆ ನಾವು ಹೊರತಾಗಿಬಿಟ್ಟಿದ್ದೇವೆ. ನಮ್ಮ ಧರ್ಮವನ್ನು ಚರಿತ್ರೆಯನ್ನು ಸಂಸ್ಕೃತಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಎಷ್ಟೋ ಅನರ್ಥಗಳನ್ನು ಇಂದು ಎದುರಿಸಬೇಕಾಗಿ ಬಂದಿದೆ. ಧರ್ಮದ ಸೋಗಿನಲ್ಲಿ ಆಚರಿಸುವ, ನಾನಾ ರೀತಿಯ ಕಂದಾಚಾರಗಳನ್ನು ನಿಷೇಧಿಸುವುದು ಅತ್ಯಂತ ಅಗತ್ಯವಿದೆ.

ಬಾಳಿಗೊಂದು ನಂಬಿಕೆ ಬೇಕು, ನಿಜ. ಈ ನಂಬಿಕೆಗಳು ವ್ಯಕ್ತಿಗತ ನೆಲೆಯುಲ್ಲಿರುತ್ತವೆ. ಅಂಥವುಗಳನ್ನು ಯಾವ ವೈಚಾರಿಕರೂ ವಿರೋಧಿಸುವುದಿಲ್ಲ. ಆದರೆ ಜನಸಾಮಾನ್ಯರನ್ನು ಶೋಷಣೆಗೆ ಒಳಪಡಿಸುವ ಮೂಢ ನಂಬಿಕೆಗಳನ್ನು ನಾಗರಿಕ ಸಮಾಜ ವಿರೋಧಿಸಲೇಬೇಕು. ಬುದ್ಧ ಹೇಳಿದ್ದು ಧರ್ಮವೇ ಹೊರತು ಮತಧರ್ಮವಲ್ಲ. ಅದು ಕಾಲಕಾಲಕ್ಕೆ ತನ್ನನ್ನು ಪುನ: ಕಟ್ಟಿಕೊಳ್ಳುತ್ತಿರುವ ಧರ್ಮ, ಬಸವಣ್ಣನದು, ವರ್ಗಭೇದ, ವರ್ಣಭೇದ, ಲಿಂಗಭೇದಗಳನ್ನು ನಿವಾರಿಸಿ ಸಕಲ ಜೀವಾತ್ಮರಿಗೆ ಲೇಸಬಯುಸುವಂಥದು. ಸತ್ಯ, ಅಹಿಂಸೆ, ಸತ್ಯಾಗ್ರಹ – ಇವು

ಗಾಂಧೀಜಿಯವರ ಚಿಂತನೆಯ ಕ್ರಿಯಾ ರೂಪಕಗಳು. 'ಎಲ್ಲಿಯವರೆಗೆ ಜಾತಿ ಮತಾಧಾರಿತ ತಾರತಮ್ಯವಿರುತ್ತದೆಯೋ ಅಲ್ಲಿ ಸ್ವಾತಂತ್ರ್ಯಕ್ಕೆ ಅಪಾಯವಿದೆ' ಎಂಬ ಎಚ್ಚರಿಕೆ ಕೊಟ್ಟವರು ಡಾ. ಅಂಬೇಡ್ಕರರು, ಅರ್ಥಹೀನವಾದ ಮೂಢ ಆಚರಣೆಗಳ ಸೀಗೆ ಮೆಳೆಯಲ್ಲಿ ಸಿಕ್ಕಿಕೊಂಡ ಮನುಷ್ಯನನ್ನು ಮತ್ತು ಸಮಾಜವನ್ನು ಮುಕ್ತಗೊಳಿಸಬೇಕಾದರೆ, ಮೌಢ್ಯಾಚರಣೆ ನಿಷೇಧ ಕಾಯ್ದೆ ತರಬೇಕೆಂಬ ಧೋರಣಾ ನಿರ್ಣಯವನ್ನು ಕರ್ನಾಟಕ ಸರಕಾರ ತೀವ್ರ ಕಾರ್ಯಗತಗೊಳಿಸಬೇಕು. ಆ ಪೂರ್ವದಲ್ಲಿ ಕಾನೂನ ತಜ್ಞರು, ವಿಜ್ಞಾನಿಗಳು, ಮನಶ್ಯಾಸ್ತ್ರಜ್ಞರು, ನಿಜವಾದ ಆಧ್ಯಾತ್ಮ ಬಲ್ಲವರು ಇವರೊಡನೆ ಸಾರ್ವಜನಿಕವಾಗಿ ಚರ್ಚಿಸಿ, ಈ ದಿಸೆಯಲ್ಲಿ ಸೂಕ್ತ ಕ್ರಮ ಕೈಗೊಳ್ಳಬಹುದಾಗಿದೆ. ಎಲ್ಲ ಧರ್ಮದವರು ಇದನ್ನು ತಮ್ಮ ಸಾಮಾಜಿಕ ಜವಾಬ್ದಾರಿಯೆಂದು ಭಾವಿಸಬೇಕು.

ನಾಡಿನ ಕಲೆ, ಸಂಸ್ಕೃತಿಯನ್ನು ಜಾಗತಿಕ ಮಟ್ಟದಲ್ಲಿ ಬಿಂಬಿಸುವ ನಾಡಹಬ್ಬ, ಮೈಸೂರು ದಸರಾ ಈ ಬಾರಿ 'ಹಸಿರು ದಸರಾ' ಆಗಿ ವಿಶ್ವದ ಗಮನ ಸೆಳೆಯಲು ಸಜ್ಜಾಗಿರುವುದು ಅತ್ಯಂತ ಸಂತೋಷದ ಸಂಗತಿ. 80 ವರುಷಗಳ ಹಿಂದೆಯೇ ಕುವೆಂಪು ಅವರು ಬರೆದ 'ಹಸುರು' ಎಂಬ ಕವಿತೆಯಲ್ಲಿ 'ಹಸುರ್ಗಟ್ಟಿತು ಕವಿಯಾತ್ಮಂ, ಹಸುರ್ ನೆತ್ತರ್ ಒಡಲಿನಲಿ' ಎಂಬ ತಾದಾತ್ಮ್ಯ ಭಾವವನ್ನು ತಾಳಿದ್ದು ಇಂದಿಗೂ ಹಸಿರಾಗಿದೆ. ಅನೇಕ ಬಗೆಯ ಮಾಲಿನ್ಯದ ಇಂದಿನ ಕಲುಷಿತ ವಾತಾವರಣದಲ್ಲಿ ಒಳ-ಹೊರಗಿನ ತಾಪಮಾನವನ್ನು ತಣಿಸಲು ಜಲ ಸಂರಕ್ಷಣೆಯೊಂದಿಗೆ 'ಹಸಿರು ದಸರಾ' ವರುಷದುದ್ದಕ್ಕೂ ಕಾರ್ಯರೂಪದಲ್ಲಿ ಕಂಗೊಳಿಸುವಂತಾಗಬೇಕು.

ಜಾತಿ-ಮತ-ಪಂಥಗಳನ್ನು ಮೀರಿದ, ನಾಡಿನ ಸರ್ವಶಕ್ತಿಯ ಸಂಕೇತವೇ 'ಕನ್ನಡಭುವನೇಶ್ವರಿ' ಕನ್ನಡ ನಾಡಿನಲ್ಲಿ ಬಾಳಿ ಬದುಕುತ್ತಿರುವ ಎಲ್ಲರ ಹೃದಯೇಶ್ವರಿ ಆಕೆ. 'ಕರ್ನಾಟಕ' ಎಂಬುದು ಕೇವಲ ಒಂದು ಭೂಪ್ರದೇಶದ ನಕಾಶೆಯಲ್ಲ.

"ಕರ್ನಾಟಕ ಎಂಬುದೇನು
ಹಸರೆ ಬರಿಯ ಮಣ್ಣಿಗೆ ?
ಮಂತ್ರಕಣಾ ! ಶಕ್ತಿಕಣಾ !
ತಾಯಿಕಣಾ ! ದೇವಿಕಣಾ !
ಋಷಿಯ ಕಾಂಬ ಕಣ್ಣಿಗೆ"

('ಅಖಂಡ ಕರ್ನಾಟಕ' – ಕುವೆಂಪು)

ಇಂಥ 'ಅಖಂಡ ಕರ್ನಾಟಕ'ದ ಸರ್ವತೋಮುಖ ಏಳಿಗೆಗಾಗಿ ನಾಡಿನ ಜನತೆಯ ಸರ್ವೋದಯಕ್ಕಾಗಿ, ದುಡಿಯಲು ನವರಾತ್ರಿಯ ಈ ಶುಭ ಸಂದರ್ಭದಲ್ಲಿ ನಾವೆಲ್ಲರೂ ಪ್ರತಿಜ್ಞೆಗೈಯೋಣ.

ಕರ್ನಾಟಕದ ಸಮೃದ್ಧಿಯಲ್ಲಿಯೇ ಭಾರತದ ಅಭಿವೃದ್ಧಿಯೂ ಅಡಗಿದೆ.

ಜಯ್ ಹಿಂದ ! ಜಯ್ ಕರ್ನಾಟಕ !